ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ಐ.ಎ.ಎಸ್. ಮತ್ತು ಐ.ಪಿ.ಎಸ್. ಅಧಿಕಾರಿಗಳ ಭ್ರಷ್ಟಾಚಾರದ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು):-

1325 (1460) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ಎಷ್ಟು ಐ.ಎ.ಎಸ್ ಮತ್ತು ಐ.ಪಿ.ಎಸ್ ಅಧಿಕಾರಿಗಳ ಮೇಲೆ ಅಕ್ರಮ ಆಸ್ತಿ ಹೊಂದಿದ ಮತ್ತು ಲಂಚ ಪಡೆದ ಆರೋಪಗಳಿವೆ;

(ಆ) ರಾಜ್ಯದ ಎಷ್ಟು ಐ.ಎ.ಎಸ್. ಮತ್ತು ಐ.ಪಿ.ಎಸ್. ಅಧಿಕಾರಿಗಳ ಮೇಲೆ ಕ್ರಿಮಿನಲ್ ಪ್ರಕರಣಗಳು ದಾಖಲಾಗಿವೆ ; ಪ್ರಸ್ತುತ ಅವು ಯಾವ ಹಂತದಲ್ಲಿವೆ ;

(ಇ) ಕೇಂದ್ರ ಸರ್ಕಾರ ಇತ್ತೀಚೆಗೆ ಲಂಚ ಪಡೆದ ಹಾಗೂ ಆದಾಯಕ್ಕಿಂತ ಹೆಚ್ಚಿನ ಆಸ್ತಿ ಹೊಂದಿದ ಆರೋಪ ಇರುವ ಐ.ಎ.ಎಸ್ ಮತ್ತು ಐ.ಪಿ.ಎಸ್ ಅಧಿಕಾರಿಗಳನ್ನು ಕಡ್ಡಾಯ ನಿವೃತ್ತಿಯ ಮೇಲೆ ಕಳುಹಿಸಿದಂತೆ ರಾಜ್ಯ ಸರ್ಕಾರವು ಲಂಚ ಪಡೆದ ಹಾಗೂ ಆದಾಯಕ್ಕಿಂತ ಹೆಚ್ಚಿನ ಆಸ್ತಿ ಹೊಂದಿದ ಆರೋಪ ಇರುವ ಐ.ಎ.ಎಸ್. ಮತ್ತು ಐ.ಪಿ.ಎಸ್ ಅಧಿಕಾರಿಗಳನ್ನು ಕಡ್ಡಾಯ ನಿವೃತ್ತಿಯ ಮೇಲೆ ಕಳುಹಿಸುವ ಕುರಿತು ಸರ್ಕಾರದ ನಿಲುವೇನು?